ಡಾ॥ ಎಚ್. ಆರ್. ರಘುನಾಥ ಭಟ್

# ಮುಕ್ಕೊಡೆಯ ಕಲ್ಲುಬರಹ

ಉತ್ತರಕನ್ನಡ ಜಿಲ್ಲೆಯ ಸಿದ್ಧಾಪುರ ತಾಲೂಕಿನ ಗುಬ್ಬಿಗೋಡಿನಲ್ಲಿ ನಾನು ನಡೆಸಿದ ಇತ್ತೀಚಿನ ಕ್ಷೇತ್ರ ಕಾರ್ಯದಲ್ಲಿ ಪತ್ತೆಯಾದ ಒಂದು ಮುಕ್ಕಾಗದೆ ಉಳಿದಿರುವ ಮುಕ್ಕೊಡೆಯ ಕಲ್ಲುಬರಹವನ್ನು ಇಲ್ಲಿ ಪ್ರಕಟಿಸಲಾಗುತ್ತಿದೆ. ಈ ಶಾಸನಶಿಲೆಯನ್ನು (ಸುಮಾರು ೭೮×೪೨ ಸೆಂ.ಮೀ.) ಗುಬ್ಬಿಗೋಡಿನ ಸಾಂಬಸದಾಶಿವೇಶ್ವರ ಗುಡಿಯ ಮಣ್ಣಿಗೋಡೆಗೆ ಹಾಕಿ ಕಟ್ಟಿಬಿಟ್ಟಿದ್ದರು. ಈಚೆಗೆ ಈ ದೇವಾಲಯದ ಜೀರ್ಣೋದ್ಧಾರ ಮಾಡುವಾಗ ಈ ಕಲ್ಲು ಹೊರಬಿತ್ತು. ಇದನ್ನು ಈ ದೇಗುಲದ ಪ್ರಾಂಗಣದಂಚಿನಲ್ಲಿ ಈಗ ನಿಲ್ಲಿಸಿಡಲಾಗಿದೆ.

"ಶ್ರೀ ಶಕವರ್ಷ ೧೫೧೦ನೆಯ ಸರ್ವಜಿತು ಸಂವತ್ಸರದ ಚೈತ್ರ ಶುದ್ಧ ಪಾಡ್ಯದಂದು ಬಿಳಗಿಯ ಮಹಾಪ್ರಭು ಘಂಟೊಡೆಯರು (ಘಂಟಣ್ಣೊಡೆಯ, ಘಂಟೇಂದ್ರ) ಬಿಳಗಿಯ ಕಲ್ಲುಬಸದಿಯ ಪಾರ್ಶ್ವನಾಥ ತೀರ್ಥಂಕರರ ಶ್ರೀಕಾರ್ಯಕ್ಕೆ ವಂದಾನೆಗ್ರಾಮದ ಪೂರ್ವ ಚತುಸ್ಸೀಮೆಯಿಂದೊಳಗಾದ ಭೂಮಿಯನ್ನು ಸರ್ವಮಾನ್ಯವಾಗಿ ಧಾರೆಯೆರೆದು ಸಮರ್ಪಿಸಿದರು"– ಎಂದು ದಾಖಲಿಸುವ ಈ ದತ್ತಿಶಾಸನಶಿಲೆ ಬಿಳಗಿ ಅರಸರ ಕಾಲದ ಒಂದು ಉತ್ತಮ ಮುಕ್ಕೊಡೆಯ ಕಲ್ಲಾಗಿದೆ. ಈಗಾಗಲೇ ಪ್ರಕಟವಾದ ಬಿಳಗಿಯ ಎರಡು ದೀರ್ಘ ಶಿಲಾಶಾಸನಗಳಲ್ಲಿ ದತ್ತಿನೀಡಿದ ಭೂಮಿಯ ಚತುರ್ಗಡಿಯಲ್ಲಿ ಮುಕ್ಕೊಡೆಯ ಕಲ್ಲು ನೆಡಿಸಿದ್ದರ ಉಲ್ಲೇಖ ಹೀಗಿದೆ:

....ನಮಗೆ ದಾನಮೂಲವಾಗಿ ಸಲುವ।
ಅಯಿವತ್ತಳಿಗೆಯನಾಡು ಚಿಕ್ಕಮಾಳಿಗೆಯನಾಡು
ಗಳಿಗೆ ಸಲುವ
ಸೋವಿನಕೊಪ್ಪ। ಹಾದಿರಿಮಾನಿ । ಮಳಿಗೆಕಯಿ।
ಕೊಜತಾರಿ। ನೇಜರಿಮಾನಿ। ಚಟ್ಟನಹಳ್ಳಿ।
ಗೊರಟಿನಹಳ್ಳಿ। ಬಲುಗಣಿ।
ಬಂದಾನೆ। ಯೀ
ವೊಂಬತ್ತು ಗ್ರಾಮಗಳನೂ ಪೂರ್ವ ಚತುಸ್ಸೀಮೆ
ಯಿಂದೊಳಗಾದ
ಸರ್ವಾಂಗೋಡು ಸಹವಾದ ಭೂಮಿಗಳಿಗೆ
ಚತುರ್ಗಡಿಯಲ್ಲಿ ಮುಕ್ಕೊಡೆಯ
ಕಲ್ಲ ನೆಡಿಸಿ ಸಹಿರಣ್ಯೋದಕ ದಾನಧಾರಾಪೂರ್ವಕ
ವಾಗಿ ಧಾರೆಯ
ನೆಱದು ಕೊಟ್ಟೆವಾಗಿ........

ಇದೇ ಶಾಸನದ ಕೊನೆಯಲ್ಲೂ...ಸರ್ವಾಂಗೋಡು ಸಹಿತವಾದ ಭೂಮಿ ಸಹ ಚತುಸ್ಸೀಮೆಯಲ್ಲಿ ಮುಕ್ಕೊಡೆಯಕಲ್ಲ ನೆಡಿಸಿದ್ದರ ಪ್ರಸ್ತಾಪ ಮತ್ತೆ ಬರುತ್ತದೆ. ಬಿಳಗಿಯ ಎರಡನೆಯ ಶಾಸನದಲ್ಲೂ "ಚತುಸ್ಸೀಮೆಯೊಳ್ಮುಕ್ಕೊಡೆಯ ಕಲ್ಲನೆಡಿಸಿ"ದ್ದು ಕಂಡುಬರುತ್ತದೆ. ಹೀಗೆ ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ ಎಂಬ ನಾಲ್ಕು ಪ್ರಧಾನ ದಿಕ್ಕುಗಳಲ್ಲಿ ದತ್ತಿಭೂಮಿಯ ಸೀಮಾರೇಖೆಯಲ್ಲಿ ಮುಕ್ಕೊಡೆಯ ಸೀಮಾಕಲ್ಲುಗಳನ್ನು ನೆಡುತ್ತಿದ್ದರು.

ಕ್ರಿಸ್ತಶಕ ೧೨೪೦ರ ಕೊಪ್ಪಳದ ನೇಮಿನಾಥ ಬಸದಿಗೆ ಬಿಟ್ಟ ದತ್ತಿಭೂಮಿಯ ಚತುರ್‌ಗಡಿಗಳಲ್ಲಿ ನಾಲ್ಕು ಮುಕ್ಕೊಡೆಯ ಕಲ್ಲುಗಳನ್ನು ನಿಲ್ಲಿಸಿದ್ದು, ಅದನ್ನು ನಾಲ್ಕು ಸಲ ಪ್ರತ್ಯೇಕವಾಗಿ ಉಲ್ಲೇಖಿಸಿದ್ದರಿಂದ ಸ್ಪಷ್ಟವಾಗುತ್ತದೆ. ಅಷ್ಟೇ ಅಲ್ಲ, ಸಂಸ್ಕೃತದಲ್ಲಿ 'ಛತ್ರತ್ರಯ

ಪಾಷಾಣ' ಎಂದು ಪುನರುಕ್ತಿಗೈದು ಮತ್ತಷ್ಟು ಖಾತ್ರೀ ಪಡಿಸಲಾಗಿದೆ. ಕ್ರಿ.ಶ. ೧೨೬೮ರ ಬೊಮ್ಮೈಮಲ್ಲೈ (ತಿರು ಚಿರಪಳ್ಳಿ) ತಮಿಳು ಶಾಸನಗಳಲ್ಲಿ 'ಶ್ರೀ ಮುಕ್ಕೊಡೈಕಲ್' ಎಂದು ಶ್ರೀಕಾರ(ತಿರು) ಸೇರಿಸಿದೆ. ಶ್ರವಣಬೆಳಗೊಳದ ನಗರಜಿನಾಲಯದ ಕ್ರಿ.ಶ.೧೨೮೨ರ ಶಾಸನದ ದಾನ ಭಾಗ ದಲ್ಲಿ ಚತುಸ್ಸೀಮೆಗಳಲ್ಲಿ'ಬರದ ಮುಕ್ಕೊಡೆ ಹಸುಬೆನೆಟ್ಟ' ಉಲ್ಲೇಖವಿದೆ. ಚಾಮರಾಜನಗರದ ಮಲೆಯೂರು ಜೈನಬಸದಿ ತಾಮ್ರಪತ್ರದಲ್ಲಿ (ಕ್ರಿ.ಶ. ೧೪೨೨) ಗ್ರಾಮದ ಚತುಸ್ಸೀಮೆಯಲ್ಲಿ ಮುಕ್ಕೊಡೆಕಲ್ಲನ್ನು ನೆಟ್ಟಿಸಿದ್ದು ಕಂಡು ಬರುತ್ತದೆ. ಸಿದ್ದಾಪುರ ತಾಲೂಕಿನ ಕೊರ್ಲಕೈ ಬಳಿ ಜೀನೀಮಠದ ಜಾಗದಲ್ಲಿ ಶಾಸನರಹಿತ ಮುಕ್ಕೊಡೆಕಲ್ಲನ್ನು ಇತ್ತೀಚಿನ ಕ್ಷೇತ್ರಕಾರ್ಯದಲ್ಲಿ ನಾನು ಶೋಧಿಸಿದ್ದೇನೆ. ಈ ಕೆಲವು ನಿದರ್ಶನಗಳಲ್ಲಿ ಸೀಮಾಕಲ್ಲಾಗಿ ನೆಟ್ಟ ನಾಲ್ಕು ಮುಕ್ಕೊಡೆಕಲ್ಲುಗಳು ನಾಲ್ಕು ಪ್ರಧಾನ ದಿಕ್ಕುಗಳಲ್ಲಿ ಇದ್ದುದು ವೇದ್ಯವಾಗುತ್ತದೆ. ಇಷ್ಟಾದರೂ ಇದರ ಗುಣ ಲಕ್ಷಣ ಹಾಗೂ ಸ್ವರೂಪದ ಬಗೆಗೆ ಖಚಿತವಾಗಿ ಇನ್ನೂ ತಿಳಿದುಬಂದಿರಲಿಲ್ಲ.

ಇದೀಗ ಶೋಧನೆಯಾದ ಶಾಸನ-ಶಿಲ್ಪ ಫಲಕವು ಮುಕ್ಕೊಡೆಯ ಬಗೆಗಿನ ನಮ್ಮ ಅರಿವನ್ನು ಹೆಚ್ಚಿಸುತ್ತದೆ. ಆಯತಾಕಾರದ ಫಲಕದಲ್ಲಿ, ಅರ್ಧಕ್ಕಿಂತ ಹೆಚ್ಚಿನ ಭಾಗ ದಲ್ಲಿ, ಮೂರು ಕೊಡೆಗಳನ್ನು ಎದ್ದು ಕಾಣುವಂತೆ ಕಂಡರಿಸಲಾಗಿದೆ. ಒಂದರ ಮೇಲೊಂದರಂತೆ ಪೇರಿ ಸಿಟ್ಟಂತೆ ಚಿತ್ರಿತವಾದ ಈ ಮೂರು ಕೊಡೆಗಳು ಕೇವಲ ಸಾಂಕೇತಿಕವಾಗಿವೆ. ಯಾವ ಅಲಂಕರಣೆಯೂ ಇಲ್ಲದೆ, ತ್ರಿಕೋನಾಕೃತಿ ಅಥವಾ ಪಿರಮಿಡ್ಡಾಕೃತಿಯಲ್ಲಿ ಇವನ್ನು ಕೆತ್ತಲಾಗಿದೆ. ಇದರ ಕೆಳಗಡೆ ಜೈನ ತೀರ್ಥಂಕ ರನ ಚಿಕಣಿಶಿಲ್ಪವಿದೆ. ಪದ್ಮಾಸನದಲ್ಲಿ ಪದ್ಮಾಸೀನನಾಗಿ ಧ್ಯಾನಮುದ್ರೆಯಲ್ಲಿ ಕುಳಿತ ತೀರ್ಥಂಕರ ವಿಗ್ರಹವೂ ತುಂಬ ಸರಳವಾಗಿದೆ. ಇಲ್ಲಿ ಮುಕ್ಕೊಡೆಗೇ ಹೆಚ್ಚಿನ ಪ್ರಾಧಾನ್ಯ ನೀಡಲಾಗಿದೆಯೆ ಹೊರತು ಈ ಜಿನಬಿಂಬ ಕ್ಕಲ್ಲ. ಮುಕ್ಕೊಡೆಗಳ ಒಟ್ಟೂ ಎತ್ತರ ೨೨ ಸೆಂ.ಮೀ. ನಷ್ಟಿದ್ದರೆ, ಜಿನಬಿಂಬದ ಎತ್ತರ ಪೀಠಸಹಿತ ಕೇವಲ ೫ ಸೆಂ.ಮೀ.ನಷ್ಟಿದೆ !

ಜೈನಶಿಲ್ಪಗಳಲ್ಲಿ ಮುಕ್ಕೊಡೆಯನ್ನು ಸಾಮಾನ್ಯ ವಾಗಿ ಕಲಾತ್ಮಕವಾಗಿ ಕಂಡರಿಸಲಾಗುತ್ತದೆ. ಮುತ್ತಿನ ಕುಚ್ಚುಗಳು, ಸುಂದರವಾದ ಕಿರೀಟ-ಕಲಶ ಇತ್ಯಾದಿ ಅಲಂಕರಣೆಗಳಿಂದ ಇದು ಶೋಭಿಸುತ್ತದೆ. ಕಿಂಶಾಪು, ದಿವ್ಯರತ್ನ-ರೇಷ್ಮೆಕುಚ್ಚುಳ್ಳ ಕೊಡೆಗೆ ಹೋಲಿಸಿದರೆ ಮುಕ್ಕೊಡೆಕಲ್ಲಿನಲ್ಲಿ ಚಿತ್ರಿತವಾದ ಕೊಡೆಗಳು ತೀರ ಸರಳ ಹಾಗೂ ಸಾಂಪ್ರದಾಯಿಕವಾಗಿವೆ. ಆದರೆ ನೀಡಿದ ದಾನ ಶಾಸನೀಯ ಸಂದರ್ಭದಲ್ಲಿ ತ್ರಿಛತ್ರ ಸಂಕೇತ ಮೂಲತಃ ಜೈನಮತೀಯವಾಗಿದೆ. ಜೈನಮತೀಯ ದಾನಿಗಳು ಜೈನಬಸದಿ, ಮಠಕ್ಕೆ ದತ್ತಿಬಿಟ್ಟ ಜಮೀನುಗಳ ಸೀಮಾ ಕಲ್ಲುಗಳಾಗಿ ನಾಲ್ಕುದಿಕ್ಕುಗಳಲ್ಲಿ ನೆಡಿಸುತ್ತಿದ್ದ ಮುಕ್ಕೊಡೆ ಕಲ್ಲುಗಳ ಸ್ವರೂಪ ಮತ್ತು ಪ್ರಕ್ರಿಯೆಯಲ್ಲಿ ಸಹಜ ವಾಗಿಯೇ ಜೈನಧರ್ಮೀಯ ಭಾವವಿದೆಯೆಂದು ಮತ್ತೆ ಹೇಳಬೇಕಿಲ್ಲ.

ಕೆಲವೆಡೆ ಮುಕ್ಕೊಡೆಯ ಬದಲಾಗಿ ಪದ್ಮಾವತಿಯ ಶಿಲ್ಪವುಳ್ಳ 'ಪದ್ಮಾವತಿಕಲ್ಲು', ಕಮಂಡಲು ಚಿತ್ರವುಳ್ಳ 'ಕುಂಡಿಗೈಕಲ್ಲು', 'ಕುಂಡಿಗಲಿ' ಮುಂತಾದವು ಜೈನ ಧರ್ಮ ಸಂಬಂಧವುಳ್ಳವಾಗಿವೆ. ಬೆಂಗಳೂರು ಜಿಲ್ಲೆ ಚಿಕ್ಕಬಳಗುಂಬದಲ್ಲಿ ದೊರೆತ ಶಾಸನಶಿಲಾ ಫಲಕದ ಮೇಲ್ತುದಿಯಲ್ಲಿ ಮುಕ್ಕೊಡೆ, ಅದರ ಕೆಳಗಡೆ ಎಡಕ್ಕೆ ಮುಖ ಮಾಡಿ ನಿಂತ ಕುದುರೆಯ ಶಿಲ್ಪ ಕಂಡುಬರು ತ್ತಿದ್ದು, ಇದೂ ಜೈನಬಸದಿಗೆ ದತ್ತಿಬಿಟ್ಟ ಭೂ ಸೀಮಾ ರೇಖೆಯನ್ನು ಗುರುತಿಸುವ ಸಲುವಾಗಿದೆಯೆಂದೂ ಹೇಳ ಲಾಗಿದೆ. ಇವೆಲ್ಲವೂ ಗಡಿಕಲ್ಲು ಅಥವಾ ಸೀಮಾಕಲ್ಲು ಗಳಾಗಿದ್ದು, ಶಾಸನ ಸಹಿತ ಇಲ್ಲವೆ ಶಾಸನರಹಿತವಾಗಿರು ತ್ತವೆ

ಈ ಬಗೆಯ ಮುಕ್ಕೊಡೆಕಲ್ಲುಗಳನ್ನು ಸೀಮಾ ಕಲ್ಲುಗಳಾಗಿ ಚತುಸ್ಸೀಮೆಯ ಪೂರ್ವ, ಪಶ್ಚಿಮ,ಉತ್ತರ, ದಕ್ಷಿಣ ಗಡಿಗಳಲ್ಲಿ ಹೆಚ್ಚಾಗಿ ನಿಲ್ಲಿಸಲಾಗುತ್ತದೆ. ಕೊಪ್ಪ ಳದ ನೇಮಿನಾಥಬಸದಿ ಶಾಸನದಲ್ಲಿರದ ಉಲ್ಲೇಖ ಮತ್ತು ಇತರ ಶಾಸನಗಳಲ್ಲಿರುವಂತೆ 'ಚತುಸ್ಸೀಮೆಯೊಳ್ಮುಕ್ಕೊಡೆ ಕಲ್ಲನೆಡಿಸಿ' ಎಂಬ ಪ್ರಯೋಗ ಈ ಮಾತನ್ನು ಸಮರ್ಥಿ ಸುತ್ತವೆ. ಮುಳಗುಂದತೀರ್ಥದ ಜೈನಬಸದಿ ಶಾಸನ (ಕ್ರಿ.ಶ. ೧೦೫೩)ದಲ್ಲಿ ಜೈನಬಸದಿಗೆ ದತ್ತಿಬಿಟ್ಟ ಹೊಲಕ್ಕೆ ಮೇರೆಯಾಗಿ ಈಶಾನ್ಯಕ್ಕೆ 'ಕವಿಲೆಯಕಲ್ಲ'ನ್ನೂ ಆಗ್ನೇಯ ದೊಳ್ 'ಆದಿತ್ಯನಕಲ್ಲ'ನ್ನೂ ನೈರುತ್ಯದೊಳ್ 'ಚಂದ್ರನ ಕಲ್ಲ'ನ್ನೂ ಮತ್ತು ವಾಯುವ್ಯದೊಳ್ 'ಪದ್ಮಾವತೀ

ಕಲ್ಲ'ನ್ನೂ ನೆಡಲಾಗಿದ್ದುದು ತುಂಬ ಸ್ವಾರಸ್ಯಕರವಾಗಿದೆ. ಇದರಿಂದ ಪ್ರಧಾನ ನಾಲ್ಕುದಿಕ್ಕುಗಳಲ್ಲಿ ಮುಕ್ಕೊಡೆ ಕಲ್ಲುಗಳನ್ನೂ ಉಳಿದ ನಾಲ್ಕು ಉಪದಿಕ್ಕುಗಳಲ್ಲಿ ಮುಕ್ಕೊಡೇತರ ಜೈನಮತೀಯ ಕಲ್ಲುಗಳನ್ನೂ ಗಡೀಕಲ್ಲು ಗಳಾಗಿ ನೆಡುತ್ತಿದ್ದ ಪದ್ಧತಿಯಿದ್ದಿರಬೇಕೆಂದು ಸದ್ಯಕ್ಕೆ ಊಹೆಮಾಡಬಹುದಾಗಿದೆ.

ಒಟ್ಟಿನಲ್ಲಿ ಹೇಳಬಹುದಾದ್ದೆಂದರೆ, ಯಾವ ದಾನಿ ಯಿಂದ ಯಾವ ಸಂಸ್ಥೆಗೆ ದತ್ತಿಬಿಟ್ಟಿರುತ್ತದೆಯೋ ಆ ವ್ಯಕ್ತಿಯ, ಸಂಸ್ಥೆಯ ಧಾರ್ಮಿಕ ಆಶಯಗಳು ಈ ಬಗೆಯ ಗಡಿಕಲ್ಲುಗಳಲ್ಲಿ ಪಡಿಮೂಡಿರುತ್ತವೆ. ಗುಬ್ಬಗೋಂಡಿನಲ್ಲಿ ಪತ್ತೆಯಾದ ಮುಕ್ಕೊಡೆಯ ಕಲ್ಲುಬರಹದಿಂದ ಇದು ಇನ್ನೂ ಸ್ಪಷ್ಟವಾಗುತ್ತದೆ. ದತ್ತಿಬಿಟ್ಟ ಭೂಮಿಯ ಎಲ್ಲೆಗಳನ್ನೂ ನಿಖರವಾಗಿ ಗುರುತಿಸಿ, ಮತೀಯ ಮುದ್ರೆ ಯೊಂದಿಗಿನ ಸೀಮಾಸೂಚಕ ಶಿಲೆಗಳನ್ನೂ ವಿದ್ಯುಕ್ತ ನಾಗಿ ನೆಡುವ ಪದ್ಧತಿ ಪ್ರಾಚೀನವಾದುದ್ದಾದರೂ ವಿಜಯನಗರ ಹಾಗೂ ವಿಜಯನಗರೋತ್ತರ ಕಾಲದಲ್ಲಿ ಇದು ವ್ಯಾಪಕವಾಗಿತ್ತು ಎಂಬುದಕ್ಕೆ ಈ ಕಾಲದ ಹಲವು ಬಗೆಯ ಗಡಿಕಲ್ಲುಗಳು ಸಾಕ್ಷಿ. ಇವು ಆ ಕಾಲದ ಸಮಾ ಜೋ-ಧಾರ್ಮಿಕ-ಕೃಷಿಕ ಇತಿಹಾಸದ ಪುನಾರಚನೆಗೆ ಪೂರಕ ಸಾಮಗ್ರಿಗಳಾಗಿವೆ ಎಂದು ಪ್ರತ್ಯೇಕವಾಗಿ ಹೇಳ ಬೇಕಾಗಿಲ್ಲ. ಅಂತೆಯೇ ಈ ಬಗೆಯ ಗಡಿಕಲ್ಲುಗಳನ್ನು ಇನ್ನೂ ವ್ಯಾಪಕವಾಗಿ, ಸಮಗ್ರವಾಗಿ ಸಂಶೋಧಿಸಿ ವರ್ಗೀಕರಿಸುವುದು ಅಗತ್ಯ.

## ಶಾಸನ ಪಾಠ

೧. ಶ್ರೀ ಶಕವರುಷ ೧೫೧೦ನೆಯ ಸರ್ವಜಿತ್ಸಂವತ್ಸ
೨. ರದ ಚೈತ್ರ ಶು ೧ ಲು ಶ್ರೀಮನ್ಮಹಾಪ್ರಭು ಘಂಟೊಡೆಯರು ಬಿಳಿಗೆ
೩. ಯ ಕಲ್ಲಬಸ್ತಿಯ ಪಾರ್ಶ್ವತೀರ್ತ್ಥೇಶ್ವರರ ಶ್ರೀಕಾರ್ಯಕ್ಕೆ ಪೊಂದಾನೆಯ ಗ್ರಾಮ
೪. ದ ಪೂರ್ವ ಚತುಸ್ಸೀಮೆಯಿಂದೊಳಗಾದ ಭೂಮಿಯನೂ ಸರ್ವ್ವಮಾ
೫. ನ್ಯವಾಗಿ ಧಾರೆಯೆಱೆದು ಸಮರ್ಪ್ಪಿಸಿದರು ಶ್ರೀ ಶ್ರೀ ಶ್ರೀ

## ಆಧಾರ ಸಾಹಿತ್ಯ


೧. ಸಾಧನೆ, ಸಂಪುಟ ೮, ಸಂಚಿಕೆ ೪, ೧೯೭೯ (ಆರ್. ಎನ್. ಗುರುವ ಅವರ ಲೇಖನ)
೨. ಉಪ್ಪಂಗಳ ರಾಮಭಟ್ಟ : ಕನ್ನಡ ವೈಯಾಕರಣ ಭಟ್ಟಾಕಲಂಕ, ಉಡುಪಿ, ೧೯೮೬
೩. ಎ.ಇ., ಸಂಪುಟ ೧೬
೪. ಪಿ.ಎಸ್.ಐ., ಸಂಪುಟ ೨, ಸಂಖ್ಯೆ ೪೭೪, ೬೫೮
೫. ಎ.ಕ., ಸಂಪುಟ ೨ (೧೯೭೩) ಮತ್ತು ಸಂಪುಟ ೪ (೧೯೭೫)
೬. ಎ.ಆರ್.ಎಸ್.ಐ.ಈ., ೧೯೩೦-೪೦-೪೨-೪೩
೭ ಎ.ಎಸ್.ಓ.ಎಂ.-ಎ.ಆರ್., ೧೯೧೦-೧೧ (೧೯೭೬)